# ಕರ್ನಾಟಕ ವಿಧಾನ ಪರಿಷತ್ತು

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 779
2) ಸದಸ್ಯರ ಹೆಸರು : ಶ್ರೀ ಕೆ.ಪ್ರತಾಪಚಂದ್ರ ಶೆಟ್ಟಿ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು)
3) ಉತ್ತರಿಸುವ ದಿನಾಂಕ : 17-12-2018
4) ಉತ್ತರಿಸಬೇಕಾದ ಸಚಿವರು : ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಮೀನುಗಾರಿಕೆ ಬಂದರುಗಳು ಯಾವುವು; ಆ ಬಂದರುಗಳನ್ನು ಬಳಕೆ ಮಾಡುವ ಮೀನುಗಾರಿಕೆ ದೋಣಿಗಳ ಸಂಖ್ಯೆ ಎಷ್ಟು; (ಬಂದರು ಮತ್ತು ಮೀನುಗಾರಿಕೆ ದೋಣಿಗಳ ಸಂಖ್ಯೆ ತಿಳಿಸುವುದು) | ರಾಜ್ಯದಲ್ಲಿರುವ 08 ಮೀನುಗಾರಿಕೆ ಬಂದರುಗಳ ಮತ್ತು ಸದರಿ ಬಂದರುಗಳನ್ನು ಬಳಕೆ ಮಾಡುವ ದೋಣಿಗಳ ಸಂಖ್ಯೆಯ ವಿವರಗಳು ಈ ಕೆಳಗಿನಂತಿವೆ:- (ಕೋಷ್ಟಕ ಕೆಳಗೆ) |

| ಕ್ರಮ ಸಂಖ್ಯೆ | ಬಂದರುಗಳು | ಬಳಕೆ ಮಾಡುವ ಮೀನುಗಾರಿಕೆ ಯಾಂತ್ರೀಕೃತ ದೋಣಿಗಳ ಸಂಖ್ಯೆ |
|---|---|---|
| 1) | ಮಂಗಳೂರು | 1282 |
| 2) | ಮಲ್ಪೆ | 1723 |
| 3) | ಗಂಗೊಳ್ಳಿ | 375 |
| 4) | ತದಡಿ | 273 |
| 5) | ಕಾರವಾರ | 204 |
| 6) | ಭಟ್ಕಳ | 227 |
| 7) | ಹೊನ್ನಾವರ | 187 |
| 8) | ಆಮದಳ್ಳಿ | 60 |
| | **ಒಟ್ಟು** | **4512** |

| | ಪ್ರಶ್ನೆ | ಉತ್ತರ |
|---|---|---|
| ಆ) | ರಾಜ್ಯದ ಕರಾವಳಿ ಭಾಗದ ಮೀನುಗಾರಿಕೆ ಕುಟುಂಬಗಳ ಸಂಖ್ಯೆ ಎಷ್ಟು; ಈ ಮೀನುಗಾರಿಕೆ ಕುಟುಂಬಗಳಿಗೆ ಸರ್ಕಾರದಿಂದ ಸಿಗಲ್ಪಡುವ ವಿಶೇಷ ಸವಲತ್ತುಗಳು ಯಾವುವು ಹಾಗೂ ಮೀನುಗಾರಿಕೆಗಾಗಿ ಸರ್ಕಾರವು ವೆಚ್ಚ ಮಾಡುವ ಅನುದಾನವೆಷ್ಟು; (ಕಾರ್ಯಕ್ರಮಗಳು ಬಂದರು, ತಾಲ್ಲೂಕು, ಜಿಲ್ಲೆ ತಿಳಿಸುವುದು) | ಕರ್ನಾಟಕ ಮೆರೈನ್ ಫಿಶರೀಸ್ ಸೆನ್ಸಸ್-2010ರ ಪ್ರಕಾರ ಕರ್ನಾಟಕ ಕರಾವಳಿಯಲ್ಲಿ 30,713 ಮೀನುಗಾರರ ಕುಟುಂಬಗಳಿವೆ.<br>ಮೀನುಗಾರಿಕೆ ಕುಟುಂಬಗಳಿಗೆ ಸರ್ಕಾರದಿಂದ ಒದಗಿಸುತ್ತಿರುವ ವಿಶೇಷ ಸವಲತ್ತುಗಳ ವಿವರವನ್ನು **ಅನುಬಂಧ-1**ರಲ್ಲಿ ಒದಗಿಸಲಾಗಿದೆ. ಮೀನುಗಾರಿಕೆಗಾಗಿ ಸರ್ಕಾರವು ವೆಚ್ಚ ಮಾಡುವ ಅನುದಾನದ ವಿವರ **ಅನುಬಂಧ-2**ರಲ್ಲಿ ಒದಗಿಸಲಾಗಿದೆ.<br>**ಅನುಬಂಧ-3**ರಲ್ಲಿ ನೀಡಿರುವ ಯೋಜನೆಗಳನ್ನು ಕರಾವಳಿ ಜಿಲ್ಲೆಗಳಾದ ದಕ್ಷಿಣ ಕನ್ನಡ, ಉಡುಪಿ ಮತ್ತು ಉತ್ತರ ಕನ್ನಡ ಜಿಲ್ಲೆಗಳಿಗೆ ಮಾತ್ರ ಅನ್ವಯವಾಗುತ್ತದೆ. ಉಳಿದ ಯೋಜನೆಗಳನ್ನು ರಾಜ್ಯದ ಎಲ್ಲಾ ತಾಲ್ಲೂಕುಗಳಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ. |

| | | |
|---|---|---|
| ಇ) | ಕರ್ನಾಟಕ ಕರಾವಳಿ ಭಾಗದ ರಾಷ್ಟ್ರೀಯ ಹೆದ್ದಾರಿಗಳಿಗೆ ಸಮಾನಾಂತರವಾಗಿರುವ ಮೀನುಗಾರಿಕೆ ರಸ್ತೆಗಳನ್ನು ನಿರ್ಲಕ್ಷಿಸಲ್ಪಟ್ಟಿರುವುದು ಸರ್ಕಾರ ಗುರುತಿಸಿದೆಯೇ; ಅದನ್ನು ಮೇಲ್ದರ್ಜೆಗೇರಿಸಲು ಸರ್ಕಾರ ಕ್ರಮವೇನು? (ರಸ್ತೆಗಳ ವಿವರ ಸಮೇತ ಮಾಹಿತಿ ನೀಡುವುದು.) | ಕರ್ನಾಟಕ ಕರಾವಳಿ ಭಾಗದ ಮೀನುಗಾರಿಕೆ ಸಂಪರ್ಕ ರಸ್ತೆಗಳನ್ನು ಗುರುತಿಸಿದ್ದು, ಒಟ್ಟಾರೆ 266 ಮೀನುಗಾರಿಕೆ ಸಂಪರ್ಕ ರಸ್ತೆಗಳು 366.65 ಕಿ.ಮೀ. ಉದ್ದ ಇರುತ್ತದೆ. ಸದರಿ ಮೀನುಗಾರಿಕೆ ಸಂಪರ್ಕ ರಸ್ತೆಗಳ ಅಭಿವೃದ್ಧಿಗಾಗಿ ಪ್ರತೀವರ್ಷ ಸುಮಾರು ರೂ.3.00 ಕೋಟಿಯಿಂದ ರೂ.6.00 ಕೋಟಿ ಅನುದಾನವನ್ನು ಕಲ್ಪಿಸಿ ಅಭಿವೃದ್ಧಿಪಡಿಸಲಾಗುತ್ತಿದೆ.<br>ಕಳೆದ ಮೂರು ವರ್ಷಗಳಲ್ಲಿ ಅಭಿವೃದ್ಧಿಪಡಿಸಿದ ರಸ್ತೆಗಳ ವಿವರಗಳನ್ನು **ಅನುಬಂಧ-4** ರಲ್ಲಿ ಒದಗಿಸಲಾಗಿದ್ದೆ.<br>ಮೀನುಗಾರಿಕೆ ಇಲಾಖೆಯಿಂದ ಗುರುತಿಸಿದ ಮೀನುಗಾರಿಕೆ ಸಂಪರ್ಕ ರಸ್ತೆಗಳ (ಮೀನುಗಾರಿಕೆ ಕೂಡು ರಸ್ತೆ) ಪಟ್ಟಿಯನ್ನು ಮಾಹಿತಿಗಾಗಿ ಲಗತ್ತಿಸಿದೆ **(ಅನುಬಂಧ-5)** |

ಸಂಖ್ಯೆ: ಪಸಂಮೀ 154 ಮೀಇಇ 2018

(ವೆಂಕಟರಾವ್ ನಾಡಗೌಡ)
ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವರು

ಅ ನು ಬಂ ಧ – 1

**ರಾಜ್ಯದ ಕರಾವಳಿ ಮೀನುಗಾರರ ಕುಟುಂಬಗಳಿಗೆ ಸರ್ಕಾರದಿಂದ ಒದಗಿಸುತ್ತಿರುವ ವಿಶೇಷ ಸೌಲಭ್ಯಗಳ ವಿವರ:**

1. **ಸಂಕಷ್ಟ ಪರಿಹಾರ ನಿಧಿ:** ಈ ನಿಧಿಯಿಂದ ಮೀನುಗಾರಿಕೆಯಲ್ಲಿ ತೊಡಗಿರುವಾಗ ನೈಸರ್ಗಿಕ ವಿಕೋಪಗಳಿಂದ ಮರಣ ಹೊಂದಿದ ಮೀನುಗಾರರ ಅವಲಂಬಿತರಿಗೆ ರೂ.3.00 ಲಕ್ಷ ಹಾಗೂ ಶಾಶ್ವತ ಅಂಗವಿಕಲರಾದ ಅಥವಾ ಭಾಗಶ: ಅಂಗವಿಕಲರಾದವರಿಗೆ ರೂ.1.00 ಲಕ್ಷ ಪರಿಹಾರ ನೀಡಲಾಗುವುದು. ಅಲ್ಲದೆ ಬಲೆಹಾನಿ, ದೋಣಿಹಾನಿ ಮತ್ತು ವೈದ್ಯಕೀಯ ವೆಚ್ಚಗಳಿಗೆ ಗರಿಷ್ಟ ರೂ.1.00 ಲಕ್ಷ ಪರಿಹಾರ ನೀಡಲಾಗುವುದು.

2. **ಮತ್ಸ್ಯಾಶ್ರಯ ಯೋಜನೆ:** ವಸತಿ ರಹಿತ ಮೀನುಗಾರರಿಗೆ ಈ ಯೋಜನೆಯಡಿ ಮನೆ ನಿರ್ಮಾಣಕ್ಕೆ ಸಾಮಾನ್ಯ ಮೀನುಗಾರರಿಗೆ ರೂ.1.20 ಲಕ್ಷ, ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡಗಳ ಫಲಾನುಭವಿಗಳಿಗೆ ಗ್ರಾಮೀಣ ಪ್ರದೇಶದಲ್ಲಿ ರೂ.1.75 ಲಕ್ಷ ಹಾಗೂ ನಗರ ಪ್ರದೇಶದಲ್ಲಿ ರೂ.2.00 ಲಕ್ಷ ಸಹಾಯಧನ ನೀಡಲಾಗುವುದು.

3. **ಮೀನುಗಾರಿಕೆ ದೋಣಿಗಳಿಗೆ ಡೀಸಲ್ ಮಾರಾಟ ಕರಿಗೆ ಮರುಪಾವತಿ:** ಮೀನುಗಾರಿಕೆ ದೋಣಿಗಳು ಬಳಸುವ ಡೀಸೆಲ್ ಮೇಲಿನ ರಾಜ್ಯ ಮಾರಾಟ ಕರಕ್ಕೆ ಸಮನಾದ ಮೊತ್ತವನ್ನು ಸಹಾಯಧನವಾಗಿ ದೋಣಿಗಳ ಮಾಲೀಕರ ಬ್ಯಾಂಕ್ ಖಾತೆಗೆ ನೇರವಾಗಿ ಬಿಡುಗಡೆ ಮಾಡುವ ಮೂಲಕ ಮರುಪಾವತಿ ಮಾಡಲಾಗುವುದು. ವಾರ್ಷಿಕ 1,50,000 ಕಿಲೋ ಲೀಟರ್ ಡೀಸೆಲ್ ಮೇಲಿನ ಮಾರಾಟ ಕರ ಮರುಪಾವತಿ ಮಾಡಲಾಗುವುದು.

4. **ಮೀನುಗಾರಿಕೆ ಸಲಕರಣೆ ಕಿಟ್ಟುಗಳ ವಿತರಣೆ:** ಕರಾವಳಿ ಮತ್ತು ಒಳನಾಡಿನಲ್ಲಿ ಸಾಂಪ್ರದಾಯಿಕ ಮೀನುಗಾರರಿಗೆ ಮೀನು ಹಿಡುವಳಿಗೆ ಬೇಕಾದ ಬಲೆ ಮತ್ತು ಪೂರಕ ಸಾಮಗ್ರಿಗಳನ್ನು ಒಳಗೊಂಡ ರೂ.10,000 ಮೌಲ್ಯದ ಕಿಟ್ ಉಚಿತವಾಗಿ ನೀಡಲಾಗುವುದು.

5. **ಮಂಜುಗಡ್ಡೆ ಸ್ಥಾವರಗಳು ಉಪಯೋಗಿಸುವ ವಿದ್ಯುತ್ ಮೇಲೆ ಸಹಾಯಧನ:** ಈ ಯೋಜನೆಯಡಿ ಕರಾವಳಿಯಲ್ಲಿನ ಮಂಜುಗಡ್ಡೆ ಘಟಕಗಳು ಉಪಯೋಗಿಸಿದ ವಿದ್ಯುತ್ ಮೇಲೆ ಪ್ರತಿ ಯೂನಿಟ್‌ಗೆ ರೂ.1.75 ರಂತೆ ಪ್ರತಿ ಘಟಕಕ್ಕೆ ವಾರ್ಷಿಕ ಗರಿಷ್ಟ ರೂ.3.50 ಲಕ್ಷ ಸಹಾಯಧನ ನೀಡಲಾಗುವುದು.

6. **ಕಡಲ ಮೀನುಗಾರರಿಗೆ ಉಳಿತಾಯ ಮತ್ತು ಪರಿಹಾರ ಯೋಜನೆ:** ಈ ಯೋಜನೆಯಡಿ ಕರಾವಳಿ ಮೀನುಗಾರರಿಂದ ರೂ.1500/– ಗಳನ್ನು ಮೀನುಗಾರಿಕೆ ಅವಧಿಯಲ್ಲಿ ವಸೂಲಿ ಮಾಡಿ ಈ ಮೊತ್ತಕ್ಕೆ ಕೇಂದ್ರ ಸರ್ಕಾರ ರೂ.1500/– ಮತ್ತು ರಾಜ್ಯ ಸರ್ಕಾರ ರೂ.1500/– ಸೇರಿಸಿ ಹೀಗೆ ಒಟ್ಟು ರೂ.4500/– ಗಳನ್ನು ಮೀನುಗಾರಿಕೆ ಇಲ್ಲದ 3 ತಿಂಗಳುಗಳಲ್ಲಿ ಪ್ರತಿ ತಿಂಗಳಿಗೆ ರೂ.1500/– ರಂತೆ ಪ್ರತಿ ಮೀನುಗಾರರಿಗೆ ನೀಡಲಾಗುವುದು.

7. **ಸಾಮೂಹಿಕ ವಿಮಾ ಯೋಜನೆ:** ರಾಜ್ಯದ 2.04 ಲಕ್ಷ ಮೀನುಗಾರರಿಗೆ ಗುಂಪು ವಿಮಾ ಸೌಲಭ್ಯ ಒದಗಿಸಲಾಗಿದೆ. ಈ ಯೋಜನೆಯಡಿ ಮೀನುಗಾರಿಕೆಯಲ್ಲಿ ತೊಡಗಿರುವಾಗ ಆಕಸ್ಮಿಕವಾಗಿ ಮರಣ ಹೊಂದಿದ ಮೀನುಗಾರರ ಅವಲಂಬಿತರಿಗೆ ಹಾಗೂ ಶಾಶ್ವತ ಅಂಗವಿಕಲರಾದ ಮೀನುಗಾರರಿಗೆ ರೂ.2.00 ಲಕ್ಷಗಳ ಪರಿಹಾರ ಮತ್ತು ಭಾಗಶ: ಅಂಗವಿಕಲರಾದವರಿಗೆ ರೂ.1.00 ಲಕ್ಷಗಳ ಪರಿಹಾರ ನೀಡಲಾಗುವುದು.

8. **ಮತ್ಸ್ಯ ಜೋಪಾಸನೆ:** ಮೀನು ಮಾರಾಟಗಾರರು ಮಾರಾಟವಾಗದೇ ಉಳಿಯುವ ಮೀನನ್ನು ಮೀನು ಮಾರುಕಟ್ಟೆಗಳಲ್ಲಿ ಶೀಥಲೀಕೃತ ಘಟಕದಲ್ಲಿ ಸಂಗ್ರಹಿಸಲು ರಾಜ್ಯದ ಆಯ್ದ 10 ಮಾರುಕಟ್ಟೆಗಳಲ್ಲಿ ಶಿಥಲೀಕೃತ ಘಟಕಗಳನ್ನು ತಲಾ ರೂ.10.00 ಲಕ್ಷ ವೆಚ್ಚದಲ್ಲಿ ಸ್ಥಾಪಿಸಲಾಗುವುದು.

9. **ನೀಲಿ ಕ್ರಾಂತಿ – ಮೀನುಗಾರಿಕೆ ಸಮಗ್ರ ಅಭಿವೃದ್ಧಿ ಮತ್ತು ನಿರ್ವಹಣೆ:** ಕೇಂದ್ರ ಸರ್ಕಾರದ ನೀಲಿಕ್ರಾಂತಿ ಸಮಗ್ರ ಮೀನುಗಾರಿಕೆ ಅಭಿವೃದ್ಧಿ ಮತ್ತು ನಿರ್ವಹಣೆ ಯೋಜನೆಯಡಿ ಕರಾವಳಿ ಮೀನುಗಾರಿಕೆ, ಮೂಲಭೂತ ಸೌಲಭ್ಯ ಮತ್ತು ಹಿಡುವಳಿ ನಂತರದ ಕಾರ್ಯಾಚರಣೆಗಳ ಅಭಿವೃದ್ಧಿ, ಮೀನುಗಾರರ ಕಲ್ಯಾಣಕ್ಕಾಗಿ ರಾಷ್ಟ್ರೀಯ ಯೋಜನೆ, ಒಳನಾಡು ಮೀನುಗಾರಿಕೆ ಮತ್ತು ಜಲಕೃಷಿ ಅಭಿವೃದ್ಧಿ, ರಾಷ್ಟ್ರೀಯ ಮೀನುಗಾರಿಕೆ ಅಭಿವೃದ್ಧಿ ಮಂಡಳಿ ಮತ್ತು ಅದರ ಚಟುವಟಿಕೆಗಳು ಮತ್ತು ಇತರೆ ಕಾರ್ಯಕ್ರಮಗಳನ್ನು ಸಾಮಾನ್ಯ ವರ್ಗದವರಿಗೆ ಶೇ. 40 ರಷ್ಟು ಹಾಗೂ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ವಿಶೇಷ ವರ್ಗಕ್ಕೆ ಶೇ. 60 ರಷ್ಟು ನೆರವಿನೊಂದಿಗೆ ಅನುಷ್ಠಾನಗೊಳಿಸಲು ಅವಕಾಶ ಕಲ್ಪಿಸಲಾಗಿದೆ.

10. **ಮಹಿಳಾ ಮೀನುಗಾರರಿಗೆ ಶೂನ್ಯ ಬಡ್ಡಿಯಲ್ಲಿ ಸಾಲ ವಿತರಣೆ:** ಮೀನುಗಾರಿಕೆ ಚಟುವಟಿಕೆಗಳನ್ನು ಕೈಗೊಳ್ಳಲು ಮಹಿಳಾ ಮೀನುಗಾರರಿಗೆ 50,000/- ರೂ.ಗಳವರೆಗೆ ಸಾಲವನ್ನು ಶೂನ್ಯ ಬಡ್ಡಿ ದರದಲ್ಲಿ ನೀಡಲಾಗುತ್ತಿದೆ.

ಅನುಬಂಧ-2

2018-19ನೇ ಸಾಲಿನಲ್ಲಿ ಸರ್ಕಾರವು ಮೀನುಗಾರಿಕೆಗಾಗಿ ವೆಚ್ಚ ಮಾಡುವ ಅನುದಾನದ ವಿವರ

| ಕ್ರಮ ಸಂಖ್ಯೆ | ಯೋಜನೆಯ ಹೆಸರು | ಆಯವ್ಯಯ (ರೂ. ಲಕ್ಷಗಳಲ್ಲಿ) |
|---|---|---|
| 1 | ಒಳನಾಡು ಮೀನುಗಾರಿಕೆ ಅಭಿವೃದ್ಧಿಗಾಗಿ ಸಹಾಯ | 766.00 |
| 2 | ಒಳನಾಡು ಮೀನುಗಾರಿಕೆ ಅಂಕಿ ಅಂಶಗಳು ಕೇ.ಪು.ಯೋ. | 27.00 |
| 3 | ಮೀನು ಮರಿ ಖರೀದಿಸಲು ನೆರವು | 10.00 |
| 4 | ಜಲಾಶಯಗಳಲ್ಲಿ ಮೀನುಮರಿ ಬಿತ್ತನೆ | 50.00 |
| 5 | ಒಳನಾಡು ಮೀನುಗಾರರಿಗೆ ಫೈಬರ್ ಗ್ಲಾಸ್ ಹರಿಗೋಲು ವಿತರಣೆ | 40.00 |
| 6 | ನೀಲಿ ಕ್ರಾಂತಿ ಮೀನುಗಾರಿಕೆಯ ಸಮಗ್ರ ಅಭಿವೃದ್ಧಿ ಮತ್ತು ನಿರ್ವಹಣೆ-ಕೇ.ಪು.ಯೋ. | 100.00 |
| 7 | ಅನುಸೂಚಿತ ಜಾತಿಗಳ ಉಪಯೋಜನೆ ಮತ್ತು ಬುಡಕಟ್ಟು ಉಪಯೋಜನೆ ಕಾಯ್ದೆ 2013ರಡಿ ಬಳಕೆಯಾಗದೆ ಇರುವ ಮೊತ್ತ | 8.00 |
| 8 | ಉತ್ತರ ಕರ್ನಾಟಕ ಒಳನಾಡು ಅಭಿವೃದ್ಧಿ ಕೇಂದ್ರ ಸ್ಥಾಪನೆ | 1.00 |
| 9 | ಕ್ಲಸ್ಟರ್ ಮಾದರಿಯಲ್ಲಿ ಮೀನುಗಾರಿಕೆ ಅಭಿವೃದ್ಧಿ | 20.00 |
| 10 | ಮೀನುಗಾರಿಕೆ ಬಂದರು ಮತ್ತು ಇಳಿದಾಣಗಳ ಅಭಿವೃದ್ಧಿ ಮತ್ತು ನಿರ್ವಹಣೆ | 232.00 |
| 11 | ಸಂಕಷ್ಟ ಪರಿಹಾರ ನಿಧಿ | 1.00 |
| 12 | ಮತ್ಸ್ಯಾಶ್ರಯ | 400.00 |
| 13 | ಮೀನುಗಾರಿಕೆ ದೋಣಿಗಳಿಗೆ ಡೀಸೆಲ್ ಮಾರಾಟ ತೆರಿಗೆ ಮರುಪಾವತಿ | 13500.00 |
| 14 | ಮೀನು ಮಾರುಕಟ್ಟೆ ನಿರ್ಮಾಣಕ್ಕೆ ಸಹಾಯ | 150.00 |
| 15 | ಸಂಶೋಧನೆ, ವಿಸ್ತರಣೆ ಪ್ರದರ್ಶನ ಮತ್ತು ತರಬೇತಿ | 167.00 |
| 16 | ಮೀನು ಹಿಡಿಯುವ ದೋಣಿಗಳ ಯಾಂತ್ರೀಕರಣ ಮತ್ತು ಸುಧಾರಣೆ | 11.00 |
| 17 | ಮೀನುಗಾರಿಕೆ ಸಲಕರಣೆ ಕಿಟ್ಟುಗಳ ಸರಬರಾಜು | 300.00 |
| 18 | ಮಂಜುಗಡ್ಡೆ ಸ್ಥಾವರಗಳು ಬಳಸುವ ವಿದ್ಯುತ್ ಮೇಲೆ ಸಹಾಯಧನ | 400.00 |
| 19 | ಉಳಿತಾಯ ಮತ್ತು ಪರಿಹಾರ ಯೋಜನೆ | 1.00 |
| 20 | ಸಾಮೂಹಿಕ ಅಪಘಾತ ವಿಮಾ ಯೋಜನೆ | 13.00 |
| 21 | ವಾಣಿಜ್ಯ ಬ್ಯಾಂಕುಗಳಿಗೆ ವ್ಯತ್ಯಾಸದ ಬಡ್ಡಿ ಮರುಪಾವತಿ | 500.00 |
| 22 | ಕರಾವಳಿ ಕೂಡು ರಸ್ತೆಗಳ ನಿರ್ವಹಣೆ | 300.00 |

| | | |
|---|---|---|
| 23 | ಗಿರಿಜನ ಪ್ರದೇಶ್ ಉಪ್ಯೋಜನೆ | 103.00 |
| 24 | ಮೀನುಗಾರಿಕೆ ಕಟ್ಟಡಗಳು ಮತ್ತು ಸೌಲಭ್ಯಗಳ ನಿರ್ಮಾಣ ಮತ್ತು ನಿರ್ವಹಣೆ | 418.00 |
| 25 | ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ | 575.30 |
| 26 | ಮೀನು ಮಾರುಕಟ್ಟೆಗಳ ಪುನರ್‌ನಿರ್ಮಾಣ ಮತ್ತು ಮೀನುಮಾರಾಟಕ್ಕೆ ಒದಗುವ ಸಾಮಗ್ರಿಗಳ ಖರೀದಿಗೆ ಸಹಾಯ | 157.50 |
| 27 | ಪ್ರದರ್ಶನ ಮತ್ತು ತರಬೇತಿ | 91.20 |
| 28 | ಮೀನುಗಾರಿಕೆ ಬಂದರುಗಳ ಹೂಳೆತ್ತುವಿಕೆ–ಕೇ.ಪು.ಯೋ. | 1.00 |
| 29 | ಮೀನುಗಾರಿಕೆ ಬಂದರುಗಳ ನಿರ್ಮಾಣ–ಕೇ.ಪು.ಯೋ | 1.00 |
| 30 | ಮೀನುಗಾರಿಕೆ ಜೆಟ್ಟಿ ಮತ್ತು ಮೀನು ಇಳಿದಾಣಗಳ ನಿರ್ಮಾಣ | 1254.00 |
| 31 | ಮೀನುಗಾರಿಕೆ ಕೊಂಡಿ ರಸ್ತೆಗಳ, ಸೇತುವೆಗಳ ಮತ್ತು ಜೆಟ್ಟಿಗಳ ನಿರ್ಮಾಣ–ನಬಾರ್ಡ್ ಸಹಾಯ | 1653.00 |

ಅನುಬಂಧ-3

ರಾಜ್ಯದ 8 ಮೀನುಗಾರಿಕೆ ಬಂದರುಗಳ ನಿರ್ವಹಣೆಗೆ ಮಾಡುವ ವೆಚ್ಚದ ವಿವರಗಳನ್ನು ಈಕೆಳಗಿನಂತಿವೆ

(ರೂ.ಲಕ್ಷಗಳಲ್ಲಿ)

| ಕ್ರಮ ಸಂಖ್ಯೆ. | ಮೀನುಗಾರಿಕೆ ಬಂದರಿನ ಹೆಸರು | ಜಿಲ್ಲೆ | ತಾಲ್ಲೂಕು | ನಿರ್ವಹಣೆಗೆ ಕಲ್ಪಿಸಲಾದ ಅನುದಾನ |
|---|---|---|---|---|
| 1. | ಮಂಗಳೂರು ಮೀನುಗಾರಿಕೆ ಬಂದರಿನ ನಿರ್ವಹಣೆ | ದಕ್ಷಿಣಕನ್ನಡ | ಮಂಗಳೂರು | 8.45 |
| 2. | ಮಲ್ಪೆ ಮೀನುಗಾರಿಕೆ ಬಂದರಿನ ನಿರ್ವಹಣೆ | ಉಡುಪಿ | ಉಡುಪಿ | 27.68 |
| 3. | ಗಂಗೊಳ್ಳಿ ಮೀನುಗಾರಿಕೆ ಬಂದರಿನ ನಿರ್ವಹಣೆ | ಉಡುಪಿ | ಕುಂದಾಪುರ | 17.68 |
| 4. | ಹೊನ್ನಾವರ ಮೀನುಗಾರಿಕೆ ಬಂದರಿನ ನಿರ್ವಹಣೆ | ಉತ್ತರಕನ್ನಡ | ಭಟ್ಕಳ | 15.10 |
| 5. | ಭಟ್ಕಳ ಮೀನುಗಾರಿಕೆ ಬಂದರಿನ ನಿರ್ವಹಣೆ | ಉತ್ತರಕನ್ನಡ | ಭಟ್ಕಳ | 9.32 |
| 6. | ತದಡಿ ಮೀನುಗಾರಿಕೆ ಬಂದರಿನ ನಿರ್ವಹಣೆ | ಉತ್ತರಕನ್ನಡ | ಭಟ್ಕಳ | 6.40 |
| 7. | ಆಮದಳ್ಳಿ ಮೀನುಗಾರಿಕೆ ಬಂದರಿನ ನಿರ್ವಹಣೆ | ಉತ್ತರಕನ್ನಡ | ಕಾರವಾರ | 1.50 |
| 8. | ಕಾರವಾರ ಮೀನುಗಾರಿಕೆ ಬಂದರಿನ ನಿರ್ವಹಣೆ | ಉತ್ತರಕನ್ನಡ | ಕಾರವಾರ | 0.10 |

ಅನುಬಂಧ-4

ರಾಜ್ಯದ 8 ಮೀನುಗಾರಿಕೆ ಬಂದರುಗಳ ನಿರ್ಮಾಣಕ್ಕೆ ಈ ಹಿಂದೆ ವೆಚ್ಚ ಮಾಡಿರುವಅನುದಾನದ ವಿವರಗಳು ಈ ಕೆಳಗಿನಂತಿವೆ

(ರೂ.ಲಕ್ಷಗಳಲ್ಲಿ)

| ಕ್ರಮ ಸಂಖ್ಯೆ | ಜಿಲ್ಲೆ | ತಾಲ್ಲೂಕು | ಕಾಮಗಾರಿಯ ಹೆಸರು | ಒಟ್ಟು ವೆಚ್ಚ |
|---|---|---|---|---|
| 1. | ದಕ್ಷಿಣಕನ್ನಡ | ಮಂಗಳೂರು | ಮಂಗಳೂರು ಮೀನುಗಾರಿಕೆ ಬಂದರಿನ 1ನೇ ಹಂತ | 147.80 |
| | | | ಮಂಗಳೂರು ಮೀನುಗಾರಿಕೆ ಬಂದರಿನ 2ನೇ ಹಂತ | 144.00 |
| | | | ಮಂಗಳೂರು ಮೀನುಗಾರಿಕೆ ಬಂದರಿನಅಭಿವೃದ್ಧಿಕಾಮಗಾರಿ (ಅಸ್ಸೈಡ್‌ಯೋಜನೆ) | 90.00 |
| | | | ಮಂಗಳೂರು ಮೀನುಗಾರಿಕೆ ಬಂದರಿನಲ್ಲಿ ಹರಾಜು ಮಳಿಗೆ ನಿರ್ಮಾಣ (ಮೆಟ್ರೋಕ್ಯಾಶ್‌ಅಂಡ್‌ಕ್ಯಾರಿ) | 70.00 |
| | | | ಮಂಗಳೂರು ಮೀನುಗಾರಿಕೆ ಬಂದರಿನ 3ನೇ ಹಂತ | 5189.17 |
| 2. | ಉಡುಪಿ | ಉಡುಪಿ | ಮಲ್ಪೆ ಮೀನುಗಾರಿಕೆ ಬಂದರಿನ 1ನೇ ಹಂತ | 546.00 |
| | | | ಮಲ್ಪೆ ಮೀನುಗಾರಿಕೆ ಬಂದರಿನ 2ನೇ ಹಂತ | 1880.00 |
| | | | ಮಲ್ಪೆ ಮೀನುಗಾರಿಕೆ ಬಂದರಿನ ಹರಾಜುಕಟ್ಟೆ ಪುನರ್ ನಿರ್ಮಾಣ | 205.00 |
| | | | ಮಲ್ಪೆ ಮೀನುಗಾರಿಕೆ ಬಂದರಿನ 3ನೇ ಹಂತ | 4300.81 |
| | | | ಮಲ್ಪೆ ಮೀನುಗಾರಿಕೆ ಬಂದರಿನ 1 ಮತ್ತು 2ನೇ ಹಂತದ ಬಳಿ ಜೆಟ್ಟಿ ವಿಸ್ತರಣೆ ಹಾಗೂ ಇತರೆ ಕಾಮಗಾರಿಗಳು | 440.00 |
| 3. | ಉಡುಪಿ | ಕುಂದಾಪುರ | ಗಂಗೊಳ್ಳಿ ಮೀನುಗಾರಿಕೆ ಬಂದರಿನ 1ನೇ ಹಂತ | 921.40 |
| | | | ಗಂಗೊಳ್ಳಿ ಮೀನುಗಾರಿಕೆ ಬಂದರಿನಜೆಟ್ಟಿ ವಿಸ್ತರಣೆ | 540.00 |
| | | | ಗಂಗೊಳ್ಳಿ ಮೀನುಗಾರಿಕೆ ಬಂದರಿನ ಬಳಿ ಬ್ರೇಕ್‌ವಾಟರ್ ನಿರ್ಮಾಣ (0.0 ರಿಂದ 126 ಮೀ) | 457.00 |
| | | | ಗಂಗೊಳ್ಳಿ ಮೀನುಗಾರಿಕೆ ಬಂದರಿನ ಬಳಿ ಬ್ರೇಕ್‌ವಾಟರ್ ನಿರ್ಮಾಣದ 2ನೇ ಹಂತ. | 4233.33 |
| 4. | ಉತ್ತರಕನ್ನಡ | ಭಟ್ಕಳ | ಹೊನ್ನಾವರ ಮೀನುಗಾರಿಕೆ ಬಂದರಿನ 1ನೇ ಹಂತದಅಭಿವೃದ್ಧಿ | 120.00 |
| | | | ಹೊನ್ನಾವರ ಮೀನುಗಾರಿಕೆ ಬಂದರಿನಅಭಿವೃದ್ಧಿಕಾಮಗಾರಿ | 349.00 |

| | | | | |
|---|---|---|---|---|
| | | | ಹೊನ್ನಾವರ ಮೀನುಗಾರಿಕೆ ಬಂದರಿನ 2ನೇ ಹಂತದಅಭಿವೃದ್ಧಿ | 2411.81 |
| 5. | ಉತ್ತರಕನ್ನಡ | ಭಟ್ಕಳ | ತದಡಿ ಮೀನುಗಾರಿಕೆ ಬಂದರಿನ ನಿರ್ಮಾಣ (ಇಂಡೋಡ್ಯಾನಿಶ್ ಯೋಜನೆ) | |
| | | | ತದಡಿ ಮೀನುಗಾರಿಕೆ ಬಂದರಿನ ಹರಾಜು ಮಳಿಗೆ ದುರಸ್ತಿ | 10.25 |
| 6. | ಉತ್ತರಕನ್ನಡ | ಭಟ್ಕಳ | ಭಟ್ಕಳ ಮೀನುಗಾರಿಕೆ ಬಂದರು (ಬಂದರುಇಲಾಖೆಯಿಂದ ಮೀನುಗಾರಿಕೆ ಇಲಾಖೆಗೆ ಹಸ್ತಾಂತರ.) | |
| | | | ಭಟ್ಕಳ ಮೀನುಗಾರಿಕೆ ಬಂದರಿನಲ್ಲಿಜೆಟ್ಟಿ ವಿಸ್ತರಣೆ | 60.89 |
| | | | ಭಟ್ಕಳ ಮೀನುಗಾರಿಕೆ ಬಂದರಿನಲ್ಲಿಧಕ್ಕೆ ವಿಸ್ತರಣೆ | 495.94 |
| 7. | ಉತ್ತರಕನ್ನಡ | ಕಾರವಾರ | ಕಾರವಾರ ಬಂದರು ನಿರ್ಮಾಣ | 130.00 |
| | | | ಕಾರವಾರ ಮೀನುಗಾರಿಕೆ ಬಂದರಿನಲ್ಲಿಧಕ್ಕೆ ವಿಸ್ತರಣೆ | 215.42 |
| 8. | ಉತ್ತರಕನ್ನಡ | ಕಾರವಾರ | ಆಮದಳ್ಳಿ ಮೀನುಗಾರಿಕೆ ಬಂದರಿನಅಭಿವೃದ್ಧಿಕಾಮಗಾರಿ. | 1042.00 |

## ಅನುಬಂಧ 5

ಕರಾವಳಿ ಜಿಲ್ಲೆಗಳಾದ ದಕ್ಷಿಣ ಕನ್ನಡ, ಉಡುಪಿ ಮತ್ತು ಉತ್ತರಕನ್ನಡ ಜಿಲ್ಲೆಗಳಲ್ಲಿ ಮಾತ್ರ ಜಾರಿಯಲ್ಲಿರುವ ಯೋಜನೆಗಳು

| ಕ್ರಮ ಸಂಖ್ಯೆ | ಯೋಜನೆಯ ಹೆಸರು | ಆಯವ್ಯಯ (ಲಕ್ಷಗಳಲ್ಲಿ) |
|---|---|---|
| 1 | ಮೀನುಗಾರಿಕೆ ದೋಣಿಗಳಿಗೆ ಡೀಸೆಲ್ ಮಾರಾಟ ತೆರಿಗೆ ಮರುಪಾವತಿ | 13500.00 |
| 2 | ಮಂಜುಗಡ್ಡೆ ಸ್ಥಾವರಗಳು ಬಳಸುವ ವಿದ್ಯುತ್ ಮೇಲೆ ಸಹಾಯಧನ | 400.00 |
| 3 | ಉಳಿತಾಯ ಮತ್ತು ಪರಿಹಾರ ಯೋಜನೆ | 1.00 |
| 4 | ವಾಣಿಜ್ಯ ಬ್ಯಾಂಕುಗಳಿಗೆ ವ್ಯತ್ಯಾಸದ ಬಡ್ಡಿ ಮರುಪಾವತಿ | 500.00 |
| 5 | ಕರಾವಳಿ ಕೂಡು ರಸ್ತೆಗಳ ನಿರ್ವಹಣೆ | 300.00 |
| 6 | ಮೀನುಗಾರಿಕೆ ಬಂದರುಗಳ ಹೂಳೆತ್ತುವಿಕೆ-ಕೇ.ಪು.ಯೋ. | 1.00 |
| 7 | ಮೀನುಗಾರಿಕೆ ಬಂದರುಗಳ ನಿರ್ಮಾಣ-ಕೇ.ಪು.ಯೋ | 1.00 |
| 8 | ಮೀನುಗಾರಿಕೆ ಜೆಟ್ಟಿ ಮತ್ತು ಮೀನು ಇಳಿದಾಣಗಳ ನಿರ್ಮಾಣ | 1254.00 |
| 9 | ಮೀನುಗಾರಿಕೆ ಕೊಂಡಿ ರಸ್ತೆಗಳ, ಸೇತುವೆಗಳ ಮತ್ತು ಜೆಟ್ಟಿಗಳ ನಿರ್ಮಾಣ-ನಬಾರ್ಡ್ ಸಹಾಯ | 1653.00 |
|  | ಒಟ್ಟು | **17610.00** |